ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಗುರುವಾರ, ದಿನಾಂಕ : 19 ನೇ ಮಾರ್ಚ್, 2020

ತುಂಗಭದ್ರಾ ಎಡದಂಡೆಯ ಮುಖ್ಯ ಕಾಲುವೆಗೆ ಬೇಸಿಗೆ ಕಾಲದಲ್ಲಿ ನೀರು ಸರಬರಾಜು ಮಾಡುವ ಕುರಿತು

ಶ್ರೀ ಎನ್. ಎಸ್. ಭೋಸರಾಜು (ವಿಧಾನಸಭೆಯಿಂದ ಚುನಾಯಿತರಾದವರು):-

1272 (1536) ಮಾನ್ಯ ಜಲಸಂಪನ್ಮೂಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ತುಂಗಭದ್ರಾ ಎಡದಂಡೆಯ ಮುಖ್ಯ ಕಾಲುವೆಯಿಂದ ಮಸ್ಕಿ, ಮಾನ್ವಿ, ಸಿರವಾರ, ರಾಯಚೂರು ತಾಲ್ಲೂಕುಗಳಲ್ಲಿ ರೈತರುಗಳು ಬೆಳೆಯುವ ಬೇಸಿಗೆ ಕಾಲದ ಬೆಳೆಗಳಿಗೆ ನೀರು ಸರಬರಾಜು ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು ;

(ಆ) ತುಂಗಭದ್ರಾ ಮುಖ್ಯ ಕಾಲುವೆಯಲ್ಲಿ 3400 ಕ್ಯೂಸೆಕ್ಸ್ ನೀರು ಬಿಟ್ಟಿರುವ ಸಂದರ್ಭದಲ್ಲಿ 69 ಮೈಲ್ಸಿನಲ್ಲಿ ನೀರಿನ ಪ್ರಮಾಣ ಎಷ್ಟು ಇರಬೇಕು ; ಪ್ರಸ್ತುತ, ಎಷ್ಟು ಪ್ರಮಾಣದ ನೀರು ಸರಬರಾಜು ಮಾಡಲಾಗುತ್ತದೆ ; ಈ ಮುಖ್ಯ ಕಾಲುವೆಯಲ್ಲಿ ಗೇಜುಗಳು ಸರಿ ಇಲ್ಲದೆ ಇರುವುದನ್ನು ಸರಿಪಡಿಸಲು ಸರ್ಕಾರ ತೆಗೆÀದುಕೊಂಡ ಕ್ರಮಗಳೇನು ;

(ಇ) TLBC ಮುಖ್ಯ ಕಾಲುವೆಯಲ್ಲಿ ಇರುವ 5 ವಿಭಾಗಗಳಲ್ಲಿ ವಿಭಾಗವಾರು ಎಷ್ಟು ಕ್ಯೂಸೆಕ್ಸ್ ನೀರು ಕೊಡಬೇಕು ; ಪ್ರಸ್ತುತ ಎಷ್ಟು ಕ್ಯೂಸೆಕ್ಸ್ ನೀರು ಸರಬರಾಜು ಮಾಡಲಾಗುತ್ತಿದೆ ?